# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 954 (1003)
2. ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ ರಾಥೋಡ್
   (ನಾಮ ನಿರ್ದೇಶನ ಹೊಂದಿದವರು)
3. ಉತ್ತರಿಸುವ ದಿನಾಂಕ : 21.09.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸೋಂಪುರ ಹೋಬಳಿಯಲ್ಲಿ ಬಫರ್ ಝೋನ್ ಜಾಗದಲ್ಲಿ ನೀಡಿದ ನಿವೇಶನಗಳ ಬದಲಾಗಿ ಬೇರೆ ನಿವೇಶನ ನೀಡುವಾಗ ರೂ.57.00 ಲಕ್ಷ ಹಾಗೂ ರೂ.75.00 ಲಕ್ಷಕ್ಕೆ ನೋಂದಣಿ ಮಾಡಿರುವುದಾಗಿ ಕಳೆದ ಅಧಿವೇಶನದಲ್ಲಿ ಪ್ರಸ್ತಾಪಿಸಲಾದ ಪ್ರಶ್ನೆಗೆ ತಿಳಿಸಿದರುವುದು ನಿಜವೆ; | ಹೌದು.<br><br>ಸೋಂಪುರ 1 ಮತ್ತು 2ನೇ ಹಂತದ ಕೈಗಾರಿಕಾ ಪ್ರದೇಶದ ವಿನ್ಯಾಸ ನಕ್ಷೆಯನ್ನು ಪರಿಷ್ಕರಿಸಿದ ಕಾರಣ, ಕೈಗಾರಿಕಾ ಪ್ರದೇಶದ ತಾತ್ಕಾಲಿಕ ಹಂಚಿಕೆ ದರವನ್ನು ಎಕರೆಗೆ ರೂ.57.00 ಲಕ್ಷದಂತೆ ಹಂಚಿಕೆ ಪಡೆದ ಉದ್ದಿಮೆದಾರರುಗಳಿಗೆ ಎಕರೆಗೆ ರೂ.73.82 ಲಕ್ಷದಂತೆ ಮತ್ತು ಸೋಂಪುರ 1ನೇ ಹಂತದ ಸಬ್‌ಲೇಔಟ್‌ನಲ್ಲಿ ರೂ.70.00 ಲಕ್ಷದಂತೆ ಹಂಚಿಕೆ ಪಡೆದ ಉದ್ದಿಮೆದಾರರುಗಳಿಗೆ ಎಕರೆಗೆ ರೂ.78.82 ಲಕ್ಷದಂತೆ ಪರಿಷ್ಕರಿಸಲಾಗಿದೆ.<br><br>ಹಂಚಿಕೆದಾರರು, ರೂ.57.00 ಲಕ್ಷದಂತೆ ತಾತ್ಕಾಲಿಕ ಹಂಚಿದೆ ದರದಲ್ಲಿ ಹಣ ಪಾವತಿಸಿ ಗುತ್ತಿಗೆ ಕರಾರು ಪತ್ರವನ್ನು ಪಡೆದುಕೊಂಡ ಪ್ರಕರಣಗಳಲ್ಲಿ ಪರಿಷ್ಕರಿಸಿದ ತಾತ್ಕಾಲಿಕ ಹಂಚಿಕೆ ದರ ರೂ.73.82 ಲಕ್ಷವಾಗಿದ್ದು, ಈ ವ್ಯತ್ಯಾಸದ ಮೊತ್ತವನ್ನು ಪಾವತಿಸಿಕೊಂಡು, ಸಪ್ಲಿಮೆಂಟರಿ ಗುತ್ತಿಗೆ ಕರಾರು ಪತ್ರ ಮಾಡಿಕೊಡಲಾಗಿದೆ. |
| (ಆ) | ಹಾಗಿದ್ದಲ್ಲಿ, ಮಾನ್ಯ ಕಂದಾಯ ಸಚಿವರು ಇಲಾಖೆಯವರೊಂದಿಗೆ ಚರ್ಚಿಸಿ ರೂ.57.00 ಲಕ್ಷದ ನೋಂದಣಿ ಶುಲ್ಕವನ್ನು ಕಡಿತಗೊಳಿಸಿ ರೂ.73.82 ಲಕ್ಷ ನೋಂದಣಿ ಮಾಡುವುದಾಗಿ ಭರವಸೆ ನೀಡಿದ್ದು, ಸದರಿ ಭರವಸೆಯನ್ನು ಇದುವರೆವಿಗೂ ಈಡೇರಿಸದಿರುವುದಕ್ಕೆ ಕಾರಣಗಳೇನು ಹಾಗೂ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | |

| | | |
|---|---|---|
| | | ಸಪ್ಲಿಮೆಂಟರಿ ಗುತ್ತಿಗೆ ಕರಾರು ಪತ್ರದಲ್ಲಿ ಹಿಂದೆ ನೋಂದಣಿಯಾಗಿರುವ ಗುತ್ತಿಗೆ ಕರಾರು ಪತ್ರದ ನೋಂದಣಿ ಸಂಖ್ಯೆಯನ್ನು ನಮೂದಿಸಿ, ಹೆಚ್ಚುವರಿಯಾಗಿ ಪಾವತಿಸಿರುವ ವ್ಯತ್ಯಾಸದ ಮೊತ್ತವನ್ನು ನಮೂದಿಸಲಾಗಿದೆ.<br><br>ಕೆ.ಐ.ಎ.ಡಿ.ಬಿ.ಯು ನೀಡಿದ ಸಪ್ಲಿಮೆಂಟರಿ ಗುತ್ತಿಗೆ ಕರಾರು ಪತ್ರದ ಅನ್ವಯ ಹೆಚ್ಚುವರಿಯಾಗಿ ಪಾವತಿಸಿರುವ ವ್ಯತ್ಯಾಸದ ಮೊತ್ತಕ್ಕೆ ಸಂಬಂಧಪಟ್ಟ ಉಪ ನೊಂದಣಾಧಿಕಾರಿ ಇವರು ಒಪ್ಪದೇ, ಒಟ್ಟು ಪರಿಷ್ಕೃತ ಹಂಚಿಕೆ ದರ ರೂ.73.82 ಲಕ್ಷದಂತೆ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕಗಳನ್ನು ಪಡೆದು, ನೋಂದಣಿ ಮಾಡಿರುತ್ತಾರೆ. |

ಸಂಖ್ಯೆ: ಸಿಐ 183 ಐಎಪಿ (ಇ) 2021

(ಮುರುಗೇಶ್ ಆರ್. ನಿರಾಣಿ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು